ಡಾ|| ಎಚ್. ಎಸ್. ಉಷಾರಾಣಿ*

# ಹಾಸನ ಜಿಲ್ಲೆಯ ಶಾಸನೋಕ್ತ ಲಿಪಿಕಾರರು ಮತ್ತು ರೂವಾರಿಗಳು- ಒಂದು ಅಧ್ಯಯನ

---

ಹಾಸನ ಜಿಲ್ಲೆ ಭೌಗೋಳಿಕವಾಗಿ ಮಲೆನಾಡಿನ ವ್ಯಾಪ್ತಿಗೊಳಪಟ್ಟಿದೆ. ಅನಾದಿ ಕಾಲದಿಂದಲೂ ಈ ನಾಡು ಸಂಪತ್ತು ಸಮೃದ್ಧಿಯಿಂದ ಕೂಡಿತ್ತೆಂದು ಹೇಳುವ ನೂರಾರು ಶಾಸನಗಳು ಲಭ್ಯವಿದೆ. ಹೊಯ್ಸಳರ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪ್ರಧಾನ ಕೇಂದ್ರಗಳಾಗಿದ್ದ ಶ್ರವಣಬೆಳಗೊಳ, ಹಳೇಬೀಡು, ಬೇಲೂರು ಮತ್ತು ಅರಸೀಕೆರೆ ಇಂದಿಗೂ ಪ್ರವಾಸಿಗರನ್ನು ಆಕರ್ಷಿಸುವ ತಾಣಗಳಾಗಿವೆ. ತಮ್ಮ ನಾಡಿನ ವೈಭವವನ್ನು ದಾಖಲಿಸುವಲ್ಲಿ ಲಿಪಿಕಾರರ ಮತ್ತು ರೂವಾರಿಗಳ ಪಾತ್ರ ಮಹತ್ತರವಾದುದು.

ಬಹುತೇಕ ಶಾಸನಗಳಲ್ಲಿ ಲಿಪಿಕಾರರನ್ನಾಗಲೀ ರೂವಾರಿಗಳನ್ನಾಗಲೀ ಹೆಸರಿಸಿಲ್ಲ. ಆದಾಗ್ಯೂ ಲಭ್ಯವಿರುವ ಶಾಸನಗಳಲ್ಲಿ ಹೆಸರಿಸಿರುವ ಶಾಸನ ಕವಿಗಳನ್ನು[1] ಗುರುತಿಸಲಾಗಿದೆ. ಈ ದಿಸೆಯಲ್ಲಿ ಸೇನಬೋವರನ್ನು ಗಣಿಸಿಲ್ಲ. ಲಿಪಿಕಾರರಾಗಿ ಗಣನೀಯ ಸೇವೆ ಸಲ್ಲಿಸಿದ ಸೇನಬೋವರು ಅಜ್ಞಾತರಾಗಿಯೇ ಉಳಿದಿರುವುದು ಗೋಚರಿಸುತ್ತದೆ. ಈ ಜಿಲ್ಲೆಯಲ್ಲೂ ಹೆಚ್ಚಾಗಿ ಸೇನಬೋವರು ಉಲ್ಲೇಖಿಸಲ್ಪಟ್ಟಿಲ್ಲ. ಆದಾಗ್ಯೂ ಉಕ್ತವಾಗಿರುವ ಸೇನಬೋವರು ಕಣತೂರು ಗ್ರಾಮದ ಪೋರಯ್ಯ[2] ಬ್ಯಾಡರಹಳ್ಳಿಯ ಮಾದಯನವರ ಮಕ್ಕಳು ನೀಲಕಂಠ[3], ಗಿರಿಸಿದ್ದಾಪುರದ ಸೋಮಣ[4], ಬೆಳವಾಡಿ ಮಜರೆಯ ವರದಪ್ಪ[5], ಕಣಕಟ್ಟೆಗ್ರಾಮದ ಮಾದಯ್ಯ[6], ದಾಸಣ್ಣ ಮತ್ತು ಗೋಪಯ್ಯ[7], ಮೊಸಳೆಗ್ರಾಮದ ನಾಗಣದೇವ[8], ಕೆಲ್ಲಂಗೆರೆ ಗ್ರಾಮದ ಸಿಂಪಣ್ಣ[9], ಗಂಡಸಿಗ್ರಾಮದ ಸಂಕಣ[10], ಶಂಭುನಾಥಪುರದ ಲಿಂಗಣ್ಣ[11] ಮತ್ತು

---

* ಅಧ್ಯಾಪಕ, ಸರಕಾರೀ ಕಿರಿಯ ಕಾಲೇಜು, ಟಿ. ನರಸೀಪುರ

1 ಮೇಪ್ರಂಡಿ ಮಲ್ಲಾರಿ, ಕನ್ನಡ ನಾಡಿನ ಕೆಲವು ಶಾಸನ ಕವಿಗಳು

2 ಎ.ಕ., ಸಂಪುಟ ೫. ಹಾಸನ ೪೫, ಕ್ರಿ.ಶ. ೧೦೨೫

3 ಅದೇ, ಹಾಸನ ೧೬೪, ಕ್ರಿ.ಶ. ೧೩೧೪

4 ಅದೇ, ಬೇಲೂರು ೨೪೪, ಕ್ರಿ.ಶ. ೧೨೮೫

5 ಅದೇ, ಬೇಲೂರು ೧೭೩, ಕ್ರಿ.ಶ. ೧೪೯೫

6 ಅದೇ, ಅರಸೀಕೆರೆ ೪೦, ಕ್ರಿ.ಶ. ೧೨೦೯

7 ಅದೇ, ಅರಸೀಕೆರೆ ೪೯. ಕ್ರಿ.ಶ. ೧೨೧೫

8 ಅದೇ, ಅರಸೀಕೆರೆ ೧೩. ಕ್ರಿ.ಶ. ೧೨೮೭

9 ಅದೇ. ಅರಸೀಕೆರೆ ೧೧೩, ಕ್ರಿ.ಶ. ೧೩೧೮

10 ಅದೇ, ಅರಸೀಕೆರೆ ೧೫೮, ಕ್ರಿ.ಶ. ೧೩೨೪

11 ಅದೇ, ಅರಕಲಗೂಡು ೬, ಕ್ರಿ.ಶ. ೧೨೨೯

ಹೊನ್ನಗೊಂಡನಹಳ್ಳಿಯ ಫಣಿಯಪ[12], ಮುದುಡಿ ಗ್ರಾಮದ ಶಾಸನವನ್ನು ಬರೆದ ಮಾದಯ್ಯ[13]. ಕಣಿಕಟ್ಟೆ ಗ್ರಾಮದ ಮಾದಯ್ಯನೇ ಆಗಿರಬಹುದು.

ಶಾಸನಗಳಲ್ಲಿ ದಾಖಲಿಸಿರುವಂತೆ ದಬ್ಬೆ ಅಗ್ರಹಾರದ ರೇಚಣ್ಣ[14] ಮತ್ತು ತಳಿಲೂರು ಗ್ರಾಮದ ಶ್ರೀರಂಗ ದೇವ[15] ಶೀಘ್ರಲಿಪಿಕಾರರಾಗಿದ್ದರೆಂದು ಗೊತ್ತಾಗುತ್ತದೆ.

ಈ ಜಿಲ್ಲೆಯಲ್ಲಿ ಲಭ್ಯವಿರುವ ವಿಜಯನಗರದ ಶಾಸನಗಳನ್ನು ರಚಿಸಿದಾತ ಸಭಾಪತಿ. ಈತ ಕೃಷ್ಣದೇವ ರಾಯನ ಕಾಲದಿಂದ ಅಚ್ಯುತದೇವರಾಯನವರೆಗೆ ಆಸ್ಥಾನವನ್ನಲಂಕರಿಸಿದ ಶಾಸನಕವಿ ಎಂದು ಮನದಟ್ಟಾಗುತ್ತದೆ. ಈತನ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗಿಲ್ಲ. ಈ ಜಿಲ್ಲೆಯಲ್ಲಿ ಕ್ರಿ.ಶ. ೧೫೧೫ ರಿಂದ ೧೫೬೧ರ ವರೆಗಿನ ಐದು ಶಾಸನಗಳು[16] ದೊರೆತಿರುವುದರಿಂದ ಈತ ಸುಮಾರು ೪೬ ವರ್ಷಗಳ ಕಾಲ ರಾಜಾಶ್ರಯ ಪಡೆದಿದ್ದನೆಂದು ಖಚಿತವಾಗಿ ಹೇಳಬಹುದು.

ಇನ್ನು ಈ ಜಿಲ್ಲೆಯ ಶಾಸನಗಳನ್ನು ಕೆತ್ತಿದ ರೂವಾರಿಗಳಲ್ಲಿ ವರ್ಧಮಾನಾಚಾರಿ ಗಮನಾರ್ಹ. ಶ್ರವಣಬೆಳಗೊಳದ ಏಳು ಶಾಸನಗಳನ್ನು[17] ಕಂಡರಿಸಿದ ಹಿರಿಮೆ ಈತನದ್ದಾಗಿದೆ. ಸುಮಾರು ೮೫ಕ್ಕೂ ಹೆಚ್ಚು ರೂವಾರಿಗಳನ್ನು ಶಾಸನಗಳಲ್ಲಿ ಗಮನಿಸಬಹುದಾದರೂ, ಎಲ್ಲಿಯೂ ವಾದವಿವಾದಕ್ಕೆ ಒಳಪಟ್ಟಿರುವ ಜಕಣಾಚಾರಿಯ ಪ್ರಸ್ತಾಪವಿಲ್ಲ.

ಹೊಯ್ಸಳರ ಶಾಸನಗಳಲ್ಲಿ ರೂವಾರಿಗಳಿಗೆ ಪ್ರಾಶಸ್ತ್ಯ ನೀಡಿರುವಂತೆ ಇನ್ಯಾರ ಶಾಸನಗಳಲ್ಲೂ ನೀಡಿಲ್ಲ. ಅಧಿಕ ಪ್ರಮಾಣದಲ್ಲಿ ದೇವಾಲಯಗಳು, ಕೆರೆ ಕಟ್ಟೆಗಳು ನಿರ್ಮಾಣಗೊಂಡದ್ದರಿಂದ ರೂವಾರಿಗಳ ಅಗತ್ಯ ಕಂಡು ಬಂದಿರಬೇಕು. ಆದರೆ ನಂತರದ ಕಾಲದಲ್ಲೂ ನಿರ್ಮಾಣ ಕಾರ್ಯ ಬಿರುಸಿನಿಂದಲೇ ಕೂಡಿತ್ತು. ಹೀಗಿದ್ದಾಗ್ಯೂ ಹೊಯ್ಸಳರ ಶಾಸನಗಳಲ್ಲೇ ಅಧಿಕ ಸಂಖ್ಯೆಯಲ್ಲಿ ರೂವಾರಿಗಳನ್ನು ಗುರುತಿಸಲಾಗಿದೆ. ಸಾಮಾಜಿಕವಾಗಿ ಆರ್ಥಿಕವಾಗಿ ರೂವಾರಿಗಳು ಗಳಿಸಿದ ಸ್ಥಾನಮಾನವೇ ಕಾರಣವಿರಬಹುದೇ ? ಈ ದಿಸೆಯಲ್ಲಿ ಗಂಭೀರವಾಗಿ ಚಿಂತಿಸುವ ಅಗತ್ಯವಿದೆ.

---

12 ಅದೇ, ಅರಕಲಗೂಡು ೧೦೪, ೧೫ನೇ ಶತಮಾನ

13 ಅದೇ. ಅರಸೀಕೆರೆ ೧೫೦, ಕ್ರಿ.ಶ. ೧೧೯೫

14 ಅದೇ, ಬೇಲೂರು ೨೦೦. ಕ್ರಿ.ಶ. ೧೦೭೩

15 ಅದೇ, ಅರಸೀಕೆರೆ ೧೩೦. ಕ್ರಿ.ಶ. ೧೨೦೦

16 ಅದೇ, ಹಾಸನ ೬, ಕ್ರಿ.ಶ. ೧೫೧೫ : ೯೪, ೧೫೨೪ : ೭, ಕ್ರಿ.ಶ. ೧೫೬೧ ; ಅದೇ, ಬೇಲೂರು ೧೯೭, ಕ್ರಿ.ಶ. ೧೫೪೯ ; ಅದೇ, ಅರಸೀಕೆರೆ ೧೨೬, ಕ್ರಿ.ಶ. ೧೫೩೫

17 ಅದೇ, ಸಂಪುಟ, ಶಾಸನ ಸಂಖ್ಯೆ ೭೭, ೮೨, ೧೩೬, ೧೩೫, ೧೫೬, ೧೪೯, ೫೪೭